## ಕರ್ನಾಟಕ ವಿಧಾನ ಪರಿಷತ್ತು

1. **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1888**
2. **ಮಾನ್ಯ ಸದಸ್ಯರ ಹೆಸರು : ಶ್ರೀ ದಿನೇಶ್ ಗೂಳಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)**
3. **ಉತ್ತರಿಸಬೇಕಾದ ದಿನಾಂಕ : 15.03.2022**
4. **ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು**

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 5 ವರ್ಷಗಳಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಗೆ ಎಷ್ಟು ಅಧಿಕಾರಿಗಳನ್ನು ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಿಸಲಾಯಿತು; ಅವರ ಕಾರ್ಯನಿರ್ವಹಣೆ ಅವಧಿಯ ವಿವರಗಳನ್ನು ಒದಗಿಸುವುದು; | ದಿ ಮೈಸೂರು ಷುಗರ್ ಕಂಪನಿ ಲಿ., ಮಂಡ್ಯ ಈ ಕಂಪನಿಗೆ ಕಳೆದ 5 ವರ್ಷಗಳಲ್ಲಿ ಒಟ್ಟು 11 ಮಂದಿ ಐ.ಎ.ಎಸ್. ಅಧಿಕಾರಿಗಳನ್ನು ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನಿಯೋಜಿಸಲಾಗಿದ್ದು, ವಿವರಗಳು ಈ ಕೆಳಕಂಡಂತಿವೆ. |

| ಕ್ರ. ಸಂ. | ಹೆಸರು | ಅವಧಿ | |
|---|---|---|---|
| | | ದಿನಾಂಕದಿಂದ | ದಿನಾಂಕದವರೆಗೆ |
| 1. | ಡಾ|| ಜಿ.ಸಿ. ಪ್ರಕಾಶ್ | 24.12.2016 | 23.10.2017 |
| 2. | ಡಾ|| ಎಂ.ಎನ್. ಅಜಯ್ ನಾಗಭೂಷಣ್ | 23.10.2017 | 17.01.2019 |
| 3. | ಡಾ|| ಕೆ.ವಿ. ತ್ರಿಲೋಕಚಂದ್ರ | 17.01.2019 | 07.02.2019 |
| 4. | ಡಾ||ರೇಜು | 07.02.2019 | 16.02.2019 |
| 5. | ಡಾ|| ಕೆ.ವಿ. ತ್ರಿಲೋಕಚಂದ್ರ | 16.02.2019 | 16.03.2019 |
| 6. | ಶ್ರೀ ಕೆ.ಜಿ. ಶಾಂತಾರಾಂ | 16.03.2019 | 01.06.2020 |
| 7. | ಶ್ರೀ ಪಿ. ವಸಂತಕುಮಾರ್ | 01.06.2020 | 14.07.2020 |
| 8. | ಡಾ||.ಬಿ.ಆರ್. ಮಮತ | 14.07.2020 | 30.07.2020 |
| 9. | ಡಾ|| ಹೆಚ್.ಎನ್. ಗೋಪಾಲಕೃಷ್ಣ | 30.07.2020 | 19.04.2021 |
| 10. | ಶ್ರೀ ಜಿ.ಎನ್ ಶಿವಮೂರ್ತಿ | 21.06.2021 | 30.09.2021 |
| 11. | ಡಾ|| ಹೆಚ್.ಎನ್. ಗೋಪಾಲಕೃಷ್ಣ | 01.11.2021 | ಇಲ್ಲಿಯವರೆಗೆ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಆ) | ಕನಿಷ್ಠ 3 ವರ್ಷಗಳ ಕಾಲ ವ್ಯವಸ್ಥಾಪಕ ನಿರ್ದೇಶಕರು ಒಂದೇ ಕಡೆ ಕಾರ್ಯನಿರ್ವಹಿಸುವುದರಿಂದ ಕಾರ್ಖಾನೆಯ ಬಗ್ಗೆ ಸಂಪೂರ್ಣ ಮಾಹಿತಿ ಹೊಂದಿದವರಾಗಿದ್ದು, ಅವರನ್ನು 6 ತಿಂಗಳಿಂದ ಒಂದು ವರ್ಷದೊಳಗಾಗಿ ವರ್ಗಾವಣೆ ಮಾಡಿದರೆ ಕಾರ್ಖಾನೆ ಆಡಳಿತ ಯಂತ್ರದ ಮೇಲೆ ಪರಿಣಾಮ ಬೀರಲಿರುವುದರಿಂದ ಅವರ ಸೇವೆಯನ್ನು ಕನಿಷ್ಟ ಮೂರು ವರ್ಷ ಒಂದೇ ಕಡೆ ಕಾರ್ಯನಿರ್ವಹಿಸುವ ಬಗ್ಗೆ ಸರ್ಕಾರ ಯೋಚಿಸಿದೆಯೇ? | ಆಡಳಿತಾತ್ಮಕ ಕಾರಣಗಳಿಂದ ಅಧಿಕಾರಿಗಳನ್ನು ಒಂದು ಹುದ್ದೆಯಿಂದ ಮತ್ತೊಂದು ಹುದ್ದೆಗೆ ವರ್ಗಾಯಿಸಲಾಗುತ್ತಿದೆ. ಮೈಸೂರು ಸಕ್ಕರೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಯನ್ನು ಕನಿಷ್ಟ ಮೂರು ವರ್ಷ ಒಂದೇ ಕಡೆ ಕಾರ್ಯನಿರ್ವಹಿಸಲು ನಿಯೋಜಿಸುವ ಬಗ್ಗೆ ಪರಿಶೀಲಿಸಲಾಗುವುದು. |

.....2

| | | |
|---|---|---|
| (ಇ) | ಸಕ್ಕರೆ ಕಾರ್ಖಾನೆ ಉತ್ಪನ್ನಗಳಲ್ಲಿ ಒಂದಾದ ಎಥೆನಾಲ್ ತಯಾರಿಕಾ ಘಟಕ ಪ್ರಾರಂಭಿಸುದರಿಂದ ಕಾರ್ಖಾನೆಗೆ ಲಾಭ ಹಾಗೂ ರೈತರಿಗೆ ಉಪಯುಕ್ತವಾಗುವುದರ ಬಗ್ಗೆ ಸರ್ಕಾರ ಚಿಂತಿಸಿದೆಯೇ? | ದಿ ಮೈಸೂರು ಷುಗರ್ ಕಂಪನಿ ಲಿ., ಮಂಡ್ಯ – ಈ ಕಾರ್ಖಾನೆಯನ್ನು ಸಹ – ವಿದ್ಯುತ್ ಘಟಕ, ಡಿಸ್ಟಿಲರಿ ಘಟಕ ಮತ್ತು ಎಥೆನಾಲ್ ಘಟಕಗಳನ್ನು ಒಳಗೊಂಡು 2022-23ನೇ ಹಂಗಾಮಿನಿಂದ ಪುನಶ್ಚೇತನಗೊಳಿಸಲು ದಿನಾಂಕ: 18.10.2021ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ತೀರ್ಮಾನಿಸಲಾಗಿರುತ್ತದೆ. ಅದರಂತೆ ಸದರಿ ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ಸಂಬಂಧ ತಾಂತ್ರಿಕ ವರದಿಯನ್ನು ಪಡೆಯಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಸಿಐ72 ಸಿಓಎಫ್ 2022

(ಶಂಕರ.ಬ.ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು